KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೦೬, ೨೦೦೬ (ಚೈತ್ರ ೧೬, ಶಕವರ್ಷ ೧೯೨೮) | ಸಂಚಿಕೆ ೧೪ |
|---|---|---|

## ಭಾಗ - ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 10 ರಾಶಾಪ್ರ 2003, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2006**

ಕರ್ನಾಟಕ ನಾಟಕ ಪ್ರದರ್ಶನಗಳ ಅಧಿನಿಯಮ, 1964 ಮತ್ತು ಕರ್ನಾಟಕ ನಾಟಕ ಪ್ರದರ್ಶನಗಳ ನಿಯಮಗಳು 1965ರ ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪರಕಟಿಸಲು ಆದೇಶಿಸಲಾಗಿದೆ.

1964 ಕರ್ನಾಟಕ ಅಧಿನಿಯಮ ಸಂಖ್ಯೆ 39

ಕರ್ನಾಟಕ ನಾಟಕ ಪ್ರದರ್ಶನಗಳ ಅಧಿನಿಯಮ, 1964

(1.5.2005 ರಂದು ಇದ್ದಂತೆ)

ಕರ್ನಾಟಕ ನಾಟಕ ಪ್ರದರ್ಶನಗಳ ಅಧಿನಿಯಮ, 1964

ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳುಃ**

**ಉದ್ದೇಶ ಮತ್ತು ಕಾರಣಗಳ ಹೇಳಿಕೆ**

**1**

**1964ರ ಅಧಿನಿಯಮ 39.–** ನಾಟಕ ಪ್ರದರ್ಶನಗಳ ಅಧಿನಿಯಮ, 1876 (1876ರ ಕೇಂದ್ರ ಅಧಿನಿಯಮ 19) ಮುಂಬಯಿ ಪ್ರದೇಶ, ಕೊಡಗು ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿದೆ. ಮದರಾಸು ನಾಟಕ ಪ್ರದರ್ಶನಗಳ ಅಧಿನಿಯಮ, 1954 (1954ರ ಮದ್ರಾಸು ಅಧಿನಿಯಮ 33) ಮದರಾಸು ಪರದೇಶದಲ್ಲಿ ಜಾರಿಯಲ್ಲಿದೆ. ಹೈದರಾಬಾದು ಪ್ರದೇಶ ಮತ್ತು ಮೈಸೂರು ಪ್ರದೇಶದಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಸಂವಾದಿ ಕಾನೂನು ಜಾರಿಯಲ್ಲಿಲ್ಲ.

1954 ರಲ್ಲಿ ಮದರಾಸು ಉಚ್ಚನ್ಯಾಯಾಲಯವು, ಕೇಂದ್ರ ಅಧಿನಿಯಮದ 6ನೇ ಪ್ರಕರಣವು ಸಂವಿಧಾನಕ್ಕೆ ವಿರುದ್ಧವಾಗಿರುವುದರಿಂದ ಅಸಿಂಧು ಎಂದು ತೀರ್ಮಾನಿಸಿದೆ. ಅಲಹಾಬಾದ್ ಉಚ್ಚ ನ್ಯಾಯಾಲಯವು ತರುವಾಯದ ತೀರ್ಮಾನದಲ್ಲಿ ಈ ಕೇಂದ್ರ ಅಧಿನಿಯಮವು ಸಂವಿಧಾನದ ಅಧಿಕಾರಕ್ಕೆ ಅತೀತವಾದುದು ಎಂದು ಘೋಷಿಸಿದೆ ಹಾಗೂ ಪಂಜಾಬ್ ಉಚ್ಚ ನ್ಯಾಯಾಲಯವು ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಈ ಕೇಂದ್ರ ಅಧಿನಿಯಮವನ್ನು ಬದಲಾಯಿಸಿ ಮದರಾಸು ನಾಟಕ ಪ್ರದರ್ಶನಗಳ ಅಧಿನಿಯಮ, 1954ರ ಮಾದರಿಯಲ್ಲಿ ನೂತನ ಕಾನೂನನ್ನು ಅಧಿನಿಯಮಿಸಲು ಭಾರತ ಸರ್ಕಾರವು ಸಲಹೆ ಮಾಡಿದೆ. ಆದ್ದರಿಂದ ಈ ಕೇಂದ್ರ ಅಧಿನಿಯಮವನ್ನು ನಿರಸನಗೊಳಿಸಲು ಉದ್ದೇಶಿಸಲಾಗಿದೆ ಮತ್ತು ಇಡೀ ಮೈಸೂರು ರಾಜ್ಯಕ್ಕೆ ಅನ್ವಯಿಸುವ ಏಕರೂಪದ ಕಾನೂನನ್ನು ಅಧಿನಿಯಮಿತಿಗೊಳಿಸಿ ರಾಜ್ಯದಲ್ಲಿ ಸಾರ್ವಜನಿಕ ನಾಟಕ ಪ್ರದರ್ಶನಗಳನ್ನು ವಿನಿಯಮಿಸುವುದಕ್ಕಾಗಿ ಮತ್ತು ನಿಯಂತ್ರಣಗೊಳಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಉದ್ದೇಶಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 13ನೇ ಮಾರ್ಚ್, 1963, ಪುಟ 32ರಲ್ಲಿ ಪ್ರಕಟವಾಗಿದೆ.)

**1964ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 39**

(1964ರ ಸೆಪ್ಟೆಂಬರ್ ಇಪ್ಪತ್ತನಾಲ್ಕನೇ ದಿನದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

**[1][ಕರ್ನಾಟಕ][1] ನಾಟಕ ಪ್ರದರ್ಶನಗಳ ಅಧಿನಿಯಮ, 1964**

(1964 ಜುಲೈ ಇಪ್ಪತ್ತೊಂಬತ್ತನೇ ದಿನದಂದು ರಾಜ್ಯಪಾಲರ ಅನುಮತಿ ಪಡೆದಿದೆ)

[1][ಕರ್ನಾಟಕ ರಾಜ್ಯ][1] ದಲ್ಲಿ ಸಾರ್ವಜನಿಕ ನಾಟಕ ಪ್ರದರ್ಶನಗಳ ಸೂಕ್ತನಿಯಂತ್ರಣಕ್ಕಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.

[1][ಕರ್ನಾಟಕ ರಾಜ್ಯ][1] ದಲ್ಲಿ ಸಾರ್ವಜನಿಕ ನಾಟಕ ಪ್ರದರ್ಶನಗಳ ಸೂಕ್ತ ನಿಯಂತ್ರಣಕ್ಕಾಗಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ ;

ಭಾರತ ಗಣರಾಜ್ಯದ ಹದಿನೈದನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು.–

**1. ಚಿಕ್ಕ ಹೆಸರು ಮತ್ತು ವ್ಯಾಪ್ತಿ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ನಾಟಕ ಪ್ರದರ್ಶನಗಳ ಅಧಿನಿಯಮ, 1964 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) "ಆಕ್ಷೇಪಾರ್ಹ ಪ್ರದರ್ಶನ" ಎಂದರೆ,–

(i) ಭಾರತದಲ್ಲಿ ಅಥವಾ ಅದರ ಯಾವುದೇ ರಾಜ್ಯದಲ್ಲಿ ಕಾನೂನು ಮೂಲಕ ಸ್ಥಾಪಿತವಾದ ಸರ್ಕಾರವನ್ನು ಅಥವಾ ಯಾವುದೇ ಪ್ರದೇಶದಲ್ಲಿನ ಅದರ ಪ್ರಭುತ್ವವನ್ನು ಪತನಗೊಳಿಸುವ ಅಥವಾ ಶಿಥಿಲೊಗೊಳಿಸುವ ಉದ್ದೇಶಕ್ಕಾಗಿ ಯಾವನೇ ವ್ಯಕ್ತಿಯನ್ನು ಹಿಂಸಾಕೃತ್ಯ ಅಥವಾ ವಿಧ್ವಂಸಕಕೃತ್ಯಗಳಿಗೆ ಚಿತಾಯಿಸುವ ಸಂಭವವಿರುವ ; ಅಥವಾ

(ii) ಹತ್ಯೆಮಾಡಲು, ವಿಧ್ವಂಸಕ ಕೃತ್ಯ ಎಸಗಲು ಅಥವಾ ಹಿಂಸಾತ್ಮಕವಾದ ಯಾವುದೇ ಅಪರಾಧ ಮಾಡಲು ಯಾರೇ ವ್ಯಕ್ತಿಯನ್ನು ಚಿತಾಯಿಸುವ ಸಂಭವವಿರುವ; ಅಥವಾ

(iii) ಒಕ್ಕೂಟದ ಸಶಸ್ತ್ರದಳಗಳ ಪೈಕಿ ಯಾವುದೇ ದಳದ ಅಥವಾ ಪೋಲೀಸ್ ದಳಗಳ
ಯಾವನೇ ಸದಸ್ಯನನ್ನು ಅವನ ನಿಷ್ಠೆಯಿಂದ ಅವನ ಕರ್ತವ್ಯದಿಂದ ದುರ್ಮಾಗಕ್ಕೆ ಪ್ರೇರಿಸುವ ಅಥವಾ ಯಾವುದೇ ಅಂಥ ದಳದ ನೌಕರಿ ಭರ್ತಿಯ ಮೇಲೆ ಅಥವಾ ಶಿಸ್ತಿನ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಸಂಭವವಿರುವ; ಅಥವಾ

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(iv) ಭಾರತದ ನಾಗರೀಕರ ಯಾವುದೇ ವರ್ಗವನ್ನು ಭಾರತದ ನಾಗರೀಕರ ಯಾವುದೇ ಇತರ ವರ್ಗದ ವಿರುದ್ಧ ಹಿಂಸಾಕೃತ್ಯಗಳನ್ನು ನಡೆಸಲು ಚಿತಾಯಿಸುವ ಸಂಭವವಿರುವ; ಅಥವಾ

(v) ಭಾರತದ ನಾಗರೀಕರ ಯಾವುದೇ ವರ್ಗದ ಧರ್ಮವನ್ನು ಅಥವಾ ಧಾರ್ಮಿಕ ನಂಬಿಕೆಗಳನ್ನು ಜರಿಯುವ ಅಥವಾ ದೂಷಣೆ ಮಾಡುವ ಅಥವಾ ಅಗೌರವ ತೋರಿಸುವ ಮೂಲಕ ಆ ವರ್ಗದ ಧಾರ್ಮಿಕ ಭಾವನೆಗಳನ್ನು ಉದ್ದೇಶಪೂರ್ವಕವಾಗಿ ಘಾಸಿಗೊಳಿಸುವ ಆಶಯ ಹೊಂದಿರುವ; ಅಥವಾ

(vi )ಅತ್ಯಂತ ಅಸಭ್ಯವಾಧ ಅಥವಾ ತುಚ್ಛವಾದ ಅಥವಾ ಅಶ್ಲೀಲವಾದ ಅಥವಾ ಬೆದರಿಸಿ ಹಣ ಕೀಳುವ ಉದ್ದೇಶ ಹೊಂದಿರುವ –ಯಾವುದೇ ರೂಪಕ, ಮೂಕಾಭಿನಯ ಅಥವಾ ಇತರ ನಾಟಕ.

**ವಿವರಣೆ I.**– ಒಂದು ಪ್ರದರ್ಶನವು ನಡೆಯುತ್ತಿರುವಾಗ,ಅದರಲ್ಲಿ ಯಾವುದೇ ಕಾನೂನನ್ನು ಅಥವಾ ಸರ್ಕಾರದ ಯಾವುದೇ ಕಾರ್ಯನೀತಿಯನ್ನು ಅಥವಾ ಆಡಳಿತಾತ್ಮಕ ಕ್ರಮವನ್ನು ಕಾನೂನುಸಮ್ಮತ ಮಾರ್ಗಗಳ ಮೂಲಕ ಬದಲಾವಣೆ ಮಾಡುವ ದೃಷ್ಟಿಯಿಂದ ಅಥವಾ ಅದಕ್ಕೆ ಪರಿಹಾರ ಕಂಡುಕೊಳ್ಳುವ ದೃಷ್ಟಿಯಿಂದ ಅವುಗಳ ಬಗ್ಗೆ ಅಸಮ್ಮತಿ ಅಥವಾ ಟೀಕೆಯನ್ನು ವ್ಯಕ್ತಪಡಿಸುವ ಪದಗಳನ್ನು ಹೇಳಲಾಗಿದೆ ಅಥವಾ ಸಂಜ್ಞೆಗಳು ಅಥವಾ ದೃಶ್ಯ ಚಿತ್ರಣಗಳನ್ನು ಮಾಡಲಾಗಿದೆ ಎಂಬ ಕಾರಣ ಮಾತ್ರದಿಂದಲೇ ಅದು ಆಕ್ಷೇಪಾರ್ಹವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

**ವಿವರಣೆ II.-** ಯಾವುದೇ ಪ್ರದರ್ಶನವನ್ನು ಅದು ಆಕ್ಷೇಪಾರ್ಹ ಪ್ರದರ್ಶನವೇ, ಅಲ್ಲವೇ ಎಂದು ನಿರ್ಣಯಿಸುವಾಗ ಆ ರೂಪಕ, ಮೂಕಾಭಿನಯ ಅಥವಾ ಇತರ ನಾಟಕವನ್ನು ಇಡಿಯಾಗಿ ಪರಿಗಣಿಸತಕ್ಕದ್ದು.

(2) "ಸಾರ್ವಜನಿಕ ಸ್ಥಳ" ಎಂದರೆ, ಸಾರ್ವಜನಿಕರಿಗೆ ಪ್ರದರ್ಶನವನ್ನು ನೋಡಲು ಪ್ರವೇಶ ನೀಡಲಾಗುವ ಯಾವುದೇ ಕಟ್ಟಡ ಅಥವಾ ಆವರಣ ಅಥವಾ ಬಯಲಿನಲ್ಲಿರುವ ಯಾವುದೆ ಸ್ಥಳ ಮತ್ತು ಪಕ್ಕಗಳನ್ನು ಮುಚ್ಚಿರದ ಯಾವುದೇ ಪೆಂಡಾಲ್.

**3. ಆಕ್ಷೇಪಾರ್ಹ ಪ್ರದರ್ಶನಗಳನ್ನು ನಿಷೇಧಿಸುವ ಅಧಿಕಾರ.**–(1) ಸಾರ್ವಜನಿಕ ಸ್ಥಳದಲ್ಲಿ ಪ್ರದರ್ಶಿತವಾದ ಅಥವಾ ಪ್ರದರ್ಶನವಾಗಲಿರುವ ಯಾವುದೇ ರೂಪಕವು, ಮೂಕಾಭಿನಯವು ಅಥವಾ ನಾಟಕವು ರಾಜ್ಯಸರ್ಕಾರದ ಅಭಿಪ್ರಾಯದಲ್ಲಿ ಆಕ್ಷೇಪಾರ್ಹ ಪ್ರದರ್ಶನವಾಗಿದ್ದರೆ, ಅದು ಯಾವ ಕಾರಣಗಳಿಂದ ಆ ಪ್ರದರ್ಶನವನ್ನು ಆಕ್ಷೇಪಾರ್ಹವೆಂದು ಪರಿಗಣಿಸಲಾದೆಯೋ ಆ ಕಾರಣಗಳನ್ನು ನಮೂದಿಸಿ, ಒಂದು ನೋಟೀಸ್ ಮೂಲಕ, ಪ್ರದರ್ಶನವನ್ನು ನಡೆಸುವುದಕ್ಕೆ ಜವಾಬ್ದಾರರಾದ ಸಂಘಟಕರನ್ನು ಅಥವಾ ಇತರ ಪ್ರಮುಖ ವ್ಯಕ್ತಿಗಳನ್ನು ಅಥವಾ ಅಂಥ ಸಾರ್ವಜನಿಕ ಸ್ಥಳದ ಒಡೆಯನನ್ನು ಅಥವಾ ಅಧಿಭೋಗದಾರರನ್ನು ಆ ಪ್ರದರ್ಶನವನ್ನು ಏಕೆ ನಿಷೇಧಿಸಬಾರದು ಎಂಬುದಕ್ಕೆ ನಿರ್ದಿಷ್ಟಪಡಿಸಿದ ಕಾಲಾವಧಿಯೊಳಗೆ ಕಾರಣ ತೋರಿಸುವಂತೆ ಅಗತ್ಯಪಡಿಸತಕ್ಕದ್ದು.

(2) (ಎ) (1)ನೇ ಉಪ–ಪ್ರಕರಣದ ಮೇರೆಗೆ ನೋಟೀಸ್ ನೀಡಲಾದ ವ್ಯಕ್ತಿಗಳು,–

(i) ಮೇಲೆ ಹೇಳಿದಂತೆ ಕಾರಣ ತೋರಿಸಿದರೆ; ಮತ್ತು ಮಾಡಿದ ನಿವೇದನೆಗಳನ್ನು ಮತ್ತು ಅವರು ಒದಿಗಿಸಿದ ಯಾವುದೇ ಸಾಕ್ಷ್ಯವನ್ನು ಪರಿಗಣಿಸಿದ ತರುವಾಯ, ರಾಜ್ಯಸರ್ಕಾರಕ್ಕೆ, ಪ್ರದರ್ಶನವು ಆಕ್ಷೇಪಾರ್ಹವಾದುದಲ್ಲವೆಂದು ಮನವರಿಕೆಯಾದರೆ ; ಅಥವಾ

(ii) ಆಕ್ಷೇಪಾರ್ಹವಾದ ಪದಗಳನ್ನು ಹೇಳುವುದನ್ನು ಅಥವಾ ಸಂಜ್ಞೆಗಳನ್ನು ಅಥವಾ ದೃಶ್ಯರೂಪಣಗಳನ್ನು ಬಿಟ್ಟುಬಿಡುವುದರ ಮೂಲಕ ಪ್ರದರ್ಶನವನ್ನು ಮಾರ್ಪಾಟುಗೊಳಿಸಲಾಗುವುದೆಂದು ವಾಗ್ದಾನ ಮಾಡಿದರೆ

–ರಾಜ್ಯಸರ್ಕಾರವು, ಆ ಮುಂದಿನ ವ್ಯವಹರಣೆಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) (1)ನೇ ಉಪ–ಪ್ರಕರಣದ ಮೇರೆಗೆ ನೋಟೀಸ್ ನೀಡಲಾದ ವ್ಯಕ್ತಿಗಳು,–

(i) ಮೇಲೆ ಹೇಳಿದಂತೆ ಕಾರಣಗಳನ್ನು ತೋರಿಸದಿದ್ದರೆ ; ಅಥವಾ

(ii) ಮೇಲೆ ಹೇಳಿದಂತೆ ಕಾರಣ ತೋರಿಸಿದರೆ, ಮತ್ತು ಮಾಡಿದ ನಿವೇದನೆಗಳನ್ನು ಹಾಗೂ ಒದಗಿಸಿದ ಯಾವುದೇ ಸಾಕ್ಷ್ಯವನ್ನು ಪರಿಗಣಿಸಿದ ತರುವಾಯವೂ ರಾಜ್ಯ ಸರ್ಕಾರಕ್ಕೆ ಆ ಪ್ರದರ್ಶನವು ಆಕ್ಷೇಪಾರ್ಹವಾದುದು ಎಂದು ಮನವರಿಕೆಯಾದರೆ

– ರಾಜ್ಯ ಸರ್ಕಾರವು, ಯಾವ ಕಾರಣಗಳ ಮೇಲೆ ಆ ಪ್ರದರ್ಶನವನ್ನು ಆಕ್ಷೇಪಾರ್ಹವಾದುದೆಂದು ಪರಿಗಣಿಸಲಾಗಿದೆಯೋ ಆ ಕಾರಣಗಳನ್ನು ತಿಳಿಸುವ ಆದೇಶದ ಮೂಲಕ, ಆ ಪ್ರದರ್ಶನವನ್ನು ನಿಷೇಧಿಸಬಹುದು.

(3) (2) ನೇ ಉಪ–ಪ್ರಕರಣದ (ಬಿ) ಖಂಡದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು ಕೂಡಲೇ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

(4) (1)ನೇ ಉಪ–ಪ್ರಕರಣದ (ಬಿ) ಖಂಡದ ಮೇರೆಗೆ ಮಾಡಿದ ಯಾವುದೇ ಆದೇಶವನ್ನು, ಉದ್ಘೋಷಣೆಯ ಮೂಲಕ ಸಹ ಅಧಿಸೂಚಿಸಬಹುದು ಮತ್ತು ಅದರ ಲಿಖಿತ ಅಥವಾ ಮುದ್ರಿತ ನೋಟೀಸನ್ನು ಹಾಗೆ ನಿಷೇಧಿಸಲಾದ ಪ್ರದರ್ಶನದಲ್ಲಿ ಭಾಗವಹಿಸಲು ಉದ್ದೇಶಿಸಿರುವ ವ್ಯಕ್ತಿಗಳಿಗೆ ಆದೇಶದ ಮಾಹಿತಿಯನ್ನು ನೀಡಲು ಅಳವಡಿಸಿದ ಯಾವುದೇ ಸ್ಥಳ ಅಥವಾ ಸ್ಥಳಗಳಲ್ಲಿ ಅಂಟಿಸಬಹುದು.

**4. ಆಕ್ಷೇಪಾರ್ಹ ಪ್ರದರ್ಶನಗಳನ್ನು ತಾತ್ಕಾಲಿಕವಾಗಿ ನಿಷೇಧಿಸುವ ಅಧಿಕಾರ.**– (1) ಜಿಲ್ಲಾಧಿಕಾರಿಯು, ಪ್ರದರ್ಶಿತವಾದ ಅಥವಾ ಪ್ರದರ್ಶನವಾಗಲಿರುವ ಯಾವುದೇ ರೂಪಕವು, ಮೂಕಾಭಿನಯವು ಅಥವಾ ಇತರ ನಾಟಕವು, 2ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸ್ವರೂಪದ್ದಾಗಿದ್ದು, ಶಾಂತಿ ಭಂಗಕ್ಕೆ ಕಾರಣವಾಗುವ ಸಂಭವವಿದೆ ಎಂದು ಅವನು ಅಭಿಪ್ರಾಯಪಟ್ಟರೆ, ಅಂಥ ಅಭಿಪ್ರಾಯಕ್ಕೆ ಕಾರಣಗಳನ್ನು ತಿಳಿಸುವ ಆದೇಶದ ಮೂಲಕ, ಅದರ ಪ್ರದರ್ಶನವನ್ನು ನಿಷೇಧಿಸಬಹುದು:

ಪರಂತು, ಜಿಲ್ಲಾಧಿಕಾರಿಯು, ಅಂಥ ಆದೇಶದಿಂದ ಬಾಧಿತನಾಗುವ ವ್ಯಕ್ತಿಯಿಂದ ಅಥವಾ ಪಕ್ಷಕಾರನಿಂದ ಬಂದ ಅರ್ಜಿಯ ಮೇರೆಗೆ ಅಂಥ ಆದೇಶವನ್ನು ಪುನರವಲೋಕನ ಮಾಡಬಹುದು.

(2) 10ನೇ ಪ್ರಕರಣದ ಮೇರೆಗಿನ ಅಪೀಲಿನ ಮೇಲೆ ನ್ಯಾಯಾಲಯವು ಮಾಡಿದ ಯಾವುದೇ ಆದೇಶಕ್ಕೆ ಒಳಪಟ್ಟು, ಈ ಪ್ರಕರಣದ ಮೇರೆಗಿನ ಆದೇಶವು, ಅದನ್ನು ಮಾಡಿದಂದಿನಿಂದ ಎರಡು ತಿಂಗಳುಗಳವರೆಗೆ ಜಾರಿಯಲ್ಲಿ ಉಳಿಯತಕ್ಕದ್ದು:

ಪರಂತು ಜಿಲ್ಲಾಧಿಕಾರಿಯು, ಆದೇಶವು ಜಾರಿಯಲ್ಲಿ ಮುಂದುವರಿಯತಕ್ಕ ದ್ದೆಂದು ಅಭಿಪ್ರಾಯಪಟ್ಟರೆ, ಅವನು, ಯುಕ್ತವೆಂದು ಭಾವಿಸಬಹುದಾದ ಮತ್ತಷ್ಟು ಆದೇಶದ ಅಥವಾ ಆದೇಶಗಳ ಮೂಲಕ, ಅಂಥ ಆದೇಶದಲ್ಲಿ ಅಥವಾ ಆದೇಶಗಳಲ್ಲಿ ನಿರ್ದಿಷ್ಟಪಡಿಸ ಬಹುದಾದಂತೆ ಏಕಕಾಲಕ್ಕೆ ಎರಡು ತಿಂಗಳುಗಳಿಗೆ ಮೀರದಂಥ ಮತ್ತಷ್ಟು ಅವಧಿಗೆ ಅಥವಾ ಅವಧಿಗಳಿಗೆ ಮೇಲೆ ಹೇಳಿದ ಅವಧಿಯನ್ನು ವಿಸ್ತರಿಸಬಹುದು.

**5. ನಿಷೇಧದ ಆದೇಶವನ್ನು ಜಾರಿ ಮಾಡುವುದು.–** 3ನೇ ಪ್ರಕರಣದ (1)ನೇ ಉಪ–ಪ್ರಕರಣದ (ಬಿ) ಖಂಡದ ಅಥವಾ 4ನೇ ಪ್ರಕರಣದ (1)ನೇ ಉಪ–ಪ್ರಕರಣದ ಅಥವಾ (2)ನೇ ಉಪ–ಪ್ರಕರಣದ ಮೇರೆಗಿನ ಆದೇಶದ ಒಂದು ಪ್ರತಿಯನ್ನು, ಖುದ್ದಾಗಿ ಅಥವಾ 14ನೇ ಪ್ರಕರಣದ ಮೇರೆಗೆ ಮಾಡಿದ ನಿಯಮಗಳ ಮೂಲಕ ಗೊತ್ತುಪಡಿಸಬಹುದಾದಂಥ ಇತರ ರೀತಿಯಲ್ಲಿ, ಹಾಗೆ ನಿಷೇಧಿಸಲಾದ ಪ್ರದರ್ಶನವನ್ನು ನಡೆಸಲು ಜವಾಬ್ದಾರರಾದ ಸಂಘಟಕರಿಗೆ ಅಥವಾ ಇತರ ಪ್ರಮುಖ ವ್ಯಕ್ತಿಗಳಿಗೆ ಅಥವಾ ಅದರಲ್ಲಿ ಭಾಗವಹಿಸಲಿರುವ ಯಾರೇ ವ್ಯಕ್ತಿಗೆ ಅಥವಾ ಅಂಥ ಪ್ರದರ್ಶನವು ನಡೆಯುವ ಸಾರ್ವಜನಿಕ ಸ್ಥಳದ ಒಡೆಯನಿಗೆ ಅಥವಾ ಅಧಿಭೋಗದಾರನಿಗೆ ಜಾರಿ ಮಾಡತಕ್ಕದ್ದು.

**6. ಆದೇಶವನ್ನು ಪಾಲಿಸದಿರುವುದಕ್ಕೆ ಅಥವಾ ವಾಗ್ದಾನದ ಉಲ್ಲಂಘನೆಗೆ ದಂಡ.–**3ನೇ ಪ್ರಕರಣ ಅಥವಾ 4ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಆದೇಶದ ಪ್ರತಿಯನ್ನು ಜಾರಿ ಮಾಡಲಾಗಿರುವ ಮತ್ತು ಅಂಥ ಆದೇಶವನ್ನು ಉಲ್ಲಂಘಿಸಿ ಯಾವುದೇ ಕೃತ್ಯವನ್ನು ಮಾಡಿದ ಅಥವಾ ಉದ್ದೇಶಪೂರ್ವಕವಾಗಿ ಅದಕ್ಕೆ ಅನುಮತಿಸುವ, ಮತ್ತು 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ (ii)ನೇ ಉಪಖಂಡದ ಮೇರೆಗಿನ ವಾಗ್ದಾನವನ್ನು ಉಲ್ಲಂಘಿಸಿ ಯಾವುದೇ ಕೃತ್ಯವನ್ನು ಮಾಡಿದ ಅಥವಾ ಉದ್ದೇಶಪೂರ್ವಕವಾಗಿ ಅದಕ್ಕೆ ಅನುಮತಿಸುವ, ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳುಗಳ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

**7. ನಿಷೇಧವನ್ನು ಪಾಲಿಸದಿರುವುದಕ್ಕೆ ದಂಡ .–** (1) 3ನೇ ಪ್ರಕರಣದ (3)ನೇ ಉಪ–ಪ್ರಕರಣದ ಮೇರೆಗಿನ ಒಂದು ಆದೇಶವು ಪ್ರಕಟವಾದ ತರುವಾಯ ಅಥವಾ 4ನೇ ಪ್ರಕರಣದ (1)ನೇ ಉಪ ಪ್ರಕರಣದ ಅಥವಾ (2)ನೇ ಉಪ ಪಕ್ರರಣದ ಮೇರೆಗೆ ಮಾಡಿದ ಒಂದು ಆದೇಶವು ಜಾರಿಯಲ್ಲಿರುವ ಅವಧಿಯಲ್ಲಿ ಪ್ರದರ್ಶನವನ್ನು ಸಂಘಟಿಸುವ ಅಥವಾ ನಡೆಸಲು ಜವಾಬ್ದಾರನಾಗುವ ಅಥವಾ 3ನೇ ಪ್ರಕರಣದ ಅಥವಾ 4ನೇ ಪ್ರಕರಣದ ಮೇರೆಗಿನ ಅಂಥ ಆದೇಶವು ಜಾರಿಯಲ್ಲಿದೆ ಎಂದು ಗೊತ್ತಿದ್ದರೂ ಅದರ ಮೂಲಕ ನಿಷೇಧಿಸಲಾದ ಪ್ರದರ್ಶನದಲ್ಲಿ ಅಥವಾ ಬಹುಮಟ್ಟಿಗೆ ಹಾಗೆ ನಿಷೇಧಿಸಲಾದ ಪ್ರದರ್ಶನದಂತೆಯೇ ಇರುವ ಯಾವುದೇ ಪ್ರದರ್ಶನದಲ್ಲಿ ಭಾಗವಹಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳುಗಳ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತತರಿಸಬಹುದಾದ ಜುಲ್ಮಾನೆ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಯಾವುದೇ ಸಾರ್ವಜನಿಕ ಸ್ಥಳದ ಒಡೆಯನಾಗಿದ್ದು ಅಥವಾ ಅಧಿಭೋಗದರನಾಗಿದ್ದು ಅಥವಾ ಅದನ್ನು ಉಪಯೋಗಿಸುತ್ತಿದ್ದು 3ನೇ ಪ್ರಕರಣದ ಅಥವಾ 4ನೇ ಪ್ರಕರಣದ ಮೇರೆಗೆ ನಿಷೇಧಿಸಲಾದ ಯಾವುದೇ ಪ್ರದರ್ಶನಕ್ಕಾಗಿ ಆ ಸ್ಥಳವನ್ನು ತೆರೆದಿಡುವ, ಇಟ್ಟುಕೊಂಡಿರುವ ಅಥವಾ ಉಪಯೋಗಿಸುವ ಅಥವಾ ಅದನ್ನು ಯಾವುದೇ ಅಂಥ ಪ್ರದರ್ಶನಕ್ಕಾಗಿ ತೆರೆಯಲು, ಇಟ್ಟುಕೊಳ್ಳಲು ಅಥವಾ ಉಪಯೋಗಿಸಲು ಅನುಮತಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳ ಅವಧಿವರೆಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜಿಲ್ಮಾನೆ ಅಥವಾ ಇವೆರಡರಿಂದಲೂ ದಂಡಿತನಾಗತಕ್ಕದ್ದು.

**8. ಮಾಹಿತಿ ತರಿಸಿಕೊಳ್ಳುವ ಅಧಿಕಾರ.–**(1) ಯಾವುದೇ ಉದ್ದೇಶಿತ ರೂಪಕದ, ಮೂಕಾಭಿನಯದ ಅಥವಾ ಇತರ ನಾಟಕದ ಸ್ವರೂಪವನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು, ಅಥವಾ ಅದು ಈ ಬಗ್ಗೆ ಅಧಿಕೃತಗೊಳಿಸಿದಂಥ ಅಧಿಕಾರಿಯು, ಆದೇಶದ ಮೂಲಕ, ಅಂಥ ರೂಪಕವನ್ನು, ಮೂಕಾಭಿನಯವನ್ನು ಅಥವಾ ಇತರ ನಾಟಕವನ್ನು ನಡೆಸಲು ಜವಾಬ್ದಾರರಾದ ಸಂಘಟಕರನ್ನು ಅಥವಾ ಇತರ ಪ್ರಮುಖ ವ್ಯಕ್ತಿಗಳನ್ನು, ಅಥವಾ ಅದರಲ್ಲಿ ಭಾಗವಹಿಸಲಿರುವ ಇತರ ವ್ಯಕ್ತಿಗಳನ್ನು ಅಥವಾ ಪ್ರದರ್ಶನಗೊಳ್ಳಲಿರುವ ರೂಪಕದ, ಮೂಕಾಭಿನಯದ ಅಥವಾ ಇತರ ನಾಟಕದ ಕರ್ತೃವನ್ನು, ಒಡೆಯನನ್ನು ಅಥವಾ ಮುದ್ರಣಕಾರನನ್ನು, ಅಥವಾ ಅದನ್ನು ಪ್ರದರ್ಶಿಸಲು ಉದ್ದೇಶಿಸಿರುವ ಸ್ಥಳದ ಮಾಲೀಕನನ್ನು ಅಥವಾ ಅಧಿಬೋಗದಾರನನ್ನು, ರಾಜ್ಯ ಸರ್ಕಾರವು ಅಥವಾ ಅಂಥ ಅಧಿಕಾರಿಯು ಅವಶ್ಯಕವೆಂದು ಯೋಚಿಸುವಂಥ ಮಾಹಿತಿಯನ್ನು ಒದಗಿಸುವಂತೆ ಅಗತ್ಯಪಡಿಸಬಹುದು.

(2) ಹಾಗೆ ಅಗತ್ಯಪಡಿಲಾದ ಪ್ರತಿಯೊಬ್ಬ ವ್ಯಕ್ತಿಯು, ತನಗೆ ಸಾಧ್ಯವಿರುವಷ್ಟರ ಮಟ್ಟಿಗೆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು ಮತ್ತು ಇದನ್ನು ಉಲ್ಲಂಘಿಸಿದ ಪಕ್ಷದಲ್ಲಿ ಭಾರತೀಯ ದಂಡ ಸಂಹಿತೆ (ಕೇಂದ್ರ ಅಧಿನಿಯಮ 1860XLV )ಯ 176ನೇ ಪ್ರಕರಣದ ಮೇರೆಗಿನ ಒಂದು ಅಪರಾಧವನ್ನು ಮಾಡಲಾಗಿದೆಯೆಂದು ಭಾವಿಸತಕ್ಕದ್ದು.

**9. ನಾಟಕ, ಇತ್ಯಾದಿಯ ತಾತ್ಪರ್ಯದ ಪ್ರತಿಯನ್ನು ತರಿಸಿಕೊಳ್ಳುವ ಅಧಿಕಾರ.–**(1) ರಾಜ್ಯ ಸರ್ಕಾರಕ್ಕೆ ಅಥವಾ ಜಿಲ್ಲಾಧಿಕಾರಿಗೆ ಒಂದು ಆಕ್ಷೇಪಾರ್ಹ ನಾಟಕ ಪ್ರದರ್ಶನವು ನಡೆಯಲಿದೆ ಎಂದು ನಂಬಲು ಕಾರಣವಿದ್ದರೆ, ಸಂದರ್ಭಾನುಸಾರ, ಅದು ಅಥವಾ ಅವನು, ಆದೇಶದ ಮೂಲಕ, ಯಾವುದೇ ಪ್ರದೇಶದೊಳಗಿನ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಂಥ ಯಾವುದೇ ನಾಟಕ ಪ್ರದರ್ಶನವನ್ನು, ಕೃತಿಯನ್ನು ಬರೆದಿದ್ದರೆ ಮತ್ತು ಬರೆದಿರುವಷ್ಟರ ಮಟ್ಟಿಗಿನ ಒಂದು ಪ್ರತಿಯನ್ನು ಅಥವಾ ಮೂಕಾಭಿನಯವಾಗಿದ್ದರೆ ಮತ್ತು

ಮೂಕಾಭಿನಯವಾಗಿರುವಷ್ಟರ ಮಟ್ಟಿಗೆ ಅದರ ತಾತ್ಪರ್ಯದ ಸಾಕಷ್ಟು ವಿವರವನ್ನು ಪ್ರದರ್ಶನದ ಏಳು ದಿನಗಳಿಗೆ ಕಡಿಮೆಯಿಲ್ಲದಷ್ಟು ಮುಂಚೆ ಮೇಲೆ ಹೇಳಿದ ರಾಜ್ಯ ಸರ್ಕಾರ ಅಥವಾ ಜಿಲ್ಲಾಧಿಕಾರಿಗೆ ಒದಗಿಸಿದ ಹೊರತು, ಅದನ್ನು ನಡೆಸತಕ್ಕದ್ದಲ್ಲವೆಂದು ನಿರ್ದೇಶಿಸಬಹುದು.

(2) (1)ನೇ ಉಪ-ಪ್ರಕರಣದ ಮೇರೆಗೆ ಮಾಡಿದ ಯಾವುದೇ ಆದೇಶದ ಒಂದು ಪ್ರತಿಯನ್ನು, ನಾಟಕ ಪ್ರದರ್ಶನವನ್ನು ನಡೆಸಲು ಜವಾಬ್ದಾರರಾದ ಸಂಘಟಕರಿಗೆ ಅಥವಾ ಇತರ ಪ್ರಮುಖ ವ್ಯಕ್ತಿಗಳಿಗೆ ಅಥವಾ ಅಂಥ ಪ್ರದರ್ಶನವನ್ನು ನಡೆಸಲು ಉದ್ದೇಶಿಸಿರುವ ಸಾರ್ವಜನಿಕ ಸ್ಥಳದ ಒಡೆಯನಿಗೆ ಅಥವಾ ಅಧಿಭೋಗದಾರನಿಗೆ ಜಾರಿ ಮಾಡತಕ್ಕದ್ದು ಮತ್ತು ಆ ತರುವಾಯ, ಅಂಥ ಆದೇಶವನ್ನು ಉಲ್ಲಂಘಿಸಿ ಯಾವುದೇ ಕೃತ್ಯವನ್ನು ಯಾರೇ ವ್ಯಕ್ತಿ ಮಾಡಿದರೆ ಅಥವಾ ಮಾಡಲು ಉದ್ದೇಶಪೂರ್ವಕವಾಗಿ ಅನುಮತಿಸಿದ್ದರೆ, ಅವನು, ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳುಗಳ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸ ಅಥವಾ ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು

**10. ಉಚ್ಚ ನ್ಯಾಯಾಲಯಕ್ಕೆ ಅಪೀಲು.**-(1) 3ನೇ ಪ್ರಕರಣದ (2) ನೇ ಉಪ-ಪ್ರಕರಣದ (ಬಿ) ಖಂಡದ ಮೇರೆಗಿನ ಅಥವಾ 4ನೇ ಪ್ರಕರಣದ (1)ನೇ ಉಪ-ಪ್ರಕರಣದ ಅಥವಾ (2)ನೇ ಉಪ-ಪ್ರಕರಣದ ಮೇರೆಗಿನ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, 3ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೇರೆಗೆ ಅಂಥ ಆದೇಶದ ಪ್ರಕಟಣೆಯ ಅರವತ್ತು ದಿನಗಳ ಒಳಗೆ ಅಥವಾ ಸಂದರ್ಭಾನುಸಾರ 4ನೇ ಪ್ರಕರಣದ (1)ನೇ ಉಪ-ಪ್ರಕರಣದ ಅಥವಾ (2)ನೇ ಉಪ-ಪ್ರಕರಣದ ಮೇರೆಗೆ ಆದೇಶವನ್ನು ಮಾಡಿದ ದಿನಾಂಕದಿಂದ ಅರವತ್ತು ದಿನಗಳ ಒಳಗೆ, ಉಚ್ಚನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸಬಹುದು, ಮತ್ತು ಅಂಥ ಅಪೀಲಿನ ಮೇಲೆ, ಉಚ್ಚನ್ಯಾಯಾಲಯವು, ತಾನು ಸೂಕ್ತವೆಂದು ಭಾವಿಸುವಂತೆ ಅಪೀಲು ಮಾಡಿದ ಆದೇಶವನ್ನು ಸ್ಥಿರೀಕರಿಸುವ, ವ್ಯತ್ಯಸ್ತಗೊಳಿಸುವ ಅಥವಾ ವಿಪರ್ಯಯಗೊಳಿಸುವ ಆದೇಶವನ್ನು ಮಾಡಬಹುದು ಮತ್ತು ಅವಶ್ಯಕವಾಗಬಹುದಾದಂಥ ಆನುಷಂಗಿಕ ಅಥವಾ ಪ್ರಾಸಂಗಿಕ ಆದೇಶಗಳನ್ನು ಮಾಡಬಹುದು.

(2) ಅಂಥ ಪ್ರತಿಯೊಂದು ಅಪೀಲನ್ನು, ಇಬ್ಬರಿಗಿಂತ ಕಡಿಮೆ ಇಲ್ಲದ ನ್ಯಾಯಾಧೀಶರುಳ್ಳ ಒಂದು ನ್ಯಾಯಾಪೀಠವು ವಿಚಾರಣೆ ಮಾಡತಕ್ಕದ್ದು.

**11. ಕಂಪನಿಗಳಿಂದ ಅಪರಾಧಗಳು.**- (1) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಆ ಅಪರಾಧವು ನಡೆದ ಕಾಲದಲ್ಲಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಕಂಪನಿಯ ವ್ಯವಹಾರಗಳನ್ನು ನಡೆಸಲು ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಕಾನೂನು ವ್ಯವಹರಣೆಗೆ ಗುರಿಯಾಗಲು ಮತ್ತು ತದನುಸಾರವಾಗಿ ದಂಡಿತನಾಗಲು ಬದ್ಧನಾಗತಕ್ಕದ್ದು :

ಪರಂತು, ಯಾರೇ ಅಂಥ ವ್ಯಕ್ತಿಯು ಆ ಅಪರಾಧವು ತನ್ನ ತಿಳಿವಳಿಕೆಗೆ ಬಾರದಂತೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯದಂತೆ ತಡೆಗಟ್ಟಲು ತಾನು ಎಲ್ಲಾ ಯುಕ್ತ ಎಚ್ಚರಿಕೆಯನ್ನು ವಹಿಸಿದ್ದೆನೆಂದು ರುಜುವಾತುಪಡಿಸಿದರೆ, ಈ ಉಪ-ಪ್ರಕರಣದಲ್ಲಿರುವುದು ಯಾವುದೂ, ಅವನನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ

(2) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವನ್ನು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ ಏಜೆಂಟ್, ಕಾರ್ಯದರ್ಶಿ, ಖಜಾಂಚಿ, ವ್ಯವಸ್ಥಾಪಕ ಅಥವಾ ಕಂಪನಿಯ ಇತರ ಅಧಿಕಾರಿ ಇವರ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆ ಎಂದು ಅಥವಾ ಅವರ ಯಾವುದೇ ನಿರ್ಲಕ್ಷ್ಯದಿಂದ ನಡೆದಿದೆಯೆಂದು ಆರೋಪಿಸಬಹುದಾಗಿದೆಯೆಂದು ರುಜುವಾತಾದಲ್ಲಿ ಅಂಥ ನಿರ್ದೇಶಕ, ವ್ಯವಸ್ಥಾಪಕ ಏಜೆಂಟ್, ಕಾರ್ಯದರ್ಶಿ, ಖಜಾಂಚಿ, ವ್ಯವಸ್ಥಾಪಕನ ಅಥವಾ ಇತರ ಅಧಿಕಾರಿ -ಇವರನ್ನು ಸಹ ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರ 9 ವಿರುದ್ಧದ ಕಾನೂನು ವ್ಯವಹರಣೆಗಳಿಗೆ ಅವರು ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು.

**ವಿವರಣೆ.**- ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) "ಕಂಪನಿ" ಎಂದರೆ, ನಿಗಮಿತ ನಿಕಾಯ, ಮತ್ತು ಅದು ಫರ್ಮನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ ; ಮತ್ತು

(ಬಿ) ಫರ್ಮ್‌ಗೆ ಸಂಬಂಧಿಸಿದಂತೆ " ನಿರ್ದೇಶಕ" ಎಂದರೆ, ಆ ಫರ್ಮಿನ ಪಾಲುದಾರ.

**12. ಇತರ ಕಾನೂನುಗಳ ಮೇರೆಗಿನ ಪ್ರಾಸಿಕ್ಯೂಷನ್‌ಗಳನ್ನು ಪ್ರತಿಷೇಧಿಸದಿರುವುದು.**-ಯಾವುದೇ ಪ್ರದರ್ಶನಕ್ಕೆ ಸಂಬಂಧಿಸಿದಂತೆ, 3ನೇ ಪ್ರಕರಣದ ಅಥವಾ 4ನೇ ಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡದರಿದ್ದಲ್ಲಿ, ಈ ಅಧಿನಿಯಮದಲ್ಲಿರುವುದು ಯಾವುದೂ, ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) ಅಥವಾ ಯಾವುದೇ ಇತರ ಕಾನೂನಿನ ಮೇರೆಗಿನ ಯಾವುದೇ ಪ್ರಾಸಿಕ್ಯೂಷನ್‌ಅನ್ನು ಪ್ರತಿಷೇಧಿಸತಕ್ಕದ್ದಲ್ಲ.

**13. ಸದ್ಭಾವನೆಯಿಂದ ಮಾಡಿಇದ ಕೃತ್ಯಗಳಿಗೆ ರಕ್ಷಣೆ.**- ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಲಾಗಿರುವ ಯಾವುದೇ ನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿರುವ ಯಾವುದೇ ಕಾರ್ಯಕ್ಕಾಗಿ ಯಾರೇ ಪ್ರಾಧಿಕಾರಿಯ ಅಥವಾ ಇತರ ಅಧಿಕಾರಿಯ ವಿರುದ್ಧ ಯಾವುದೇ ದಾವೆಯನ್ನು ಪ್ರಾಸಿಕ್ಯೂಷನನ್ನು ಅಥವಾ ಇತರ ಕಾನೂನು ವ್ಯವಹಾರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**14. ನಿಯಮ ರಚನಾಧಿಕಾರ.**- (1) ರಾಜ್ಯ ಸರ್ಕಾರವು, ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಅದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು, ಮತ್ತು ಅದನ್ನು ಹಾಗೆ ಇಡಲಾದ

ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ನಿಯಮವು ಆ ತರುವಾಯ, ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ ; ಆದಾಗ್ಯೂ, ಯಾವುದೇ ಅಂಥ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟುಮಾಡತಕ್ಕದ್ದಲ್ಲ.

(3) (2)ನೇ ಉಪಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಮಾರ್ಪಾಟಿಗೆ ಒಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮವೂ ಈ ಅಧಿನಿಯಮದಲ್ಲಿ ಅಧಿನಿಯಮಿಸಿದ್ದಿದ್ದರೆ ಹೇಗೋ ಹಾಗೆ ಪರಿಣಾಮ ಹೊಂದಿರತಕ್ಕದ್ದು.

**15. ನಿರಸನ.–** [1][ಬೆಳಗಾಂ ಪ್ರದೇಶ,][1] ಕೊಡಗು ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿರುವ, ನಾಟಕ ಪ್ರದರ್ಶನಗಳ ಅಧಿನಿಯಮ, 1876 (1876 ಕೇಂದ್ರ ಅಧಿನಿಯಮXIX) ಮತ್ತು [1][ಮಂಗಳೂರು ಮತ್ತು ಕೊಳ್ಳೆಗಾಲ ಪ್ರದೇಶ][1] ದಲ್ಲಿ ಜಾರಿಯಲ್ಲಿರುವ ಮದರಾಸು ನಾಟಕ ಪ್ರದರ್ಶನಗಳ ಅಧಿನಿಯಮ, 1954 (1954ರ ಮದರಾಸು ಅಧಿನಿಯಮXXXIII) ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

## ಕರ್ನಾಟಕ ನಾಟಕ ಪ್ರದರ್ಶನಗಳ ನಿಯಮಗಳು, 1965
## ನಿಯಮಗಳ ಅನುಕ್ರಮಣಿಕೆ

**ನಿಯಮಗಳುಃ**



### ಗೃಹ ಸಚಿವಾಲಯ
### ಅಧಿಸೂಚನೆ
### ಸಂಖ್ಯೆ : ಹೆಚ್‌ಡಿ. 10 ಸಿಎನ್‌ಪಿ 64, ದಿನಾಂಕ 21ನೇ ಜನವರಿ, 1966

**ಜಿಎಸ್‌ಆರ್ 830.–** ಕರ್ನಾಟಕ ನಾಟಕ ಪ್ರದರ್ಶನಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 39)ರ 14ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಮುಂದಿನ ನಿಯಮಗಳನ್ನು ರಚಿಸುತ್ತದೆ.

### ನಿಯಮಗಳು

**1. ಹೆಸರು.–**ಈ ನಿಯಮಗಳನ್ನು ಕರ್ನಾಟಕ ನಾಟಕ ಪ್ರದರ್ಶನಗಳ ನಿಯಮಗಳು 1965 ಎಂದು ಕರೆಯತಕ್ಕದ್ದು.

**2. ಪರಿಭಾಷೆಗಳು.–**ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದಹೊರತು,–

(1) **"ಅಧಿನಿಯಮ"** ಎಂದರೆ ಕರ್ನಾಟಕ ನಾಟಕ ಪ್ರದರ್ಶನಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 39);

(2) **"ಪ್ರಕರಣ"** ಎಂದರೆ ಈ ಅಧಿನಿಯಮದ ಒಂದು ಪ್ರಕರಣ.

**3. ನೋಟೀಸು ಮತ್ತು ಆದೇಶಗಳ ಜಾರಿಯ ವಿಧಾನ.–** 3ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೇರೆಗಿನ ಪ್ರತಿಯೊಂದು ನೋಟೀಸಿನ ಒಂದು ಪ್ರತಿಯನ್ನು ಮತ್ತು 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಬಿ) ಖಂಡದ, 4ನೇ ಪ್ರಕರಣದ (1)ನೇ ಉಪ–ಪ್ರಕರಣದ, 8ನೇ ಪ್ರಕರಣದ (1)ನೇ ಉಪ–ಪ್ರಕರಣದ ಮತ್ತು 9ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೇರೆಗೆ ಹೊರಡಿಸಲಾದ ಪ್ರತಿಯೊಂದು ಆದೇಶದ ಒಂದು ಪ್ರತಿಯನ್ನು, ದಂಡ ಪ್ರಕ್ರಿಯಾ ಸಂಹಿತೆ, 1898 (1898ರ ಕೇಂದ್ರ ಅಧಿನಿಯಮ 5) ರಲ್ಲಿ ಸಮನುಗಳ ಜಾರಿಗೆ ಉಪಬಂಧಿಸಲಾದ ವಿಧಾನದಲ್ಲಿ ಸದರಿ ಪ್ರಕರಣಗಳಲ್ಲಿ ಉಲ್ಲೇಖಿಸಲಾದ ವ್ಯಕ್ತಿಗಳಿಗೆ ಜಾರಿ ಮಾಡತಕ್ಕದ್ದು.

**4.ರಿಜಿಸ್ಟರಿನ ನಿರ್ವಹಣೆ.–**4ನೇ ಪ್ರಕರಣದ ಮೇರೆಗೆ ನಿಷೇಧಿಸಲಾದಂಥ ಆಕ್ಷೇಪಾರ್ಹ ಪ್ರದರ್ಶನಗಳ ಪೂರ್ಣ ವಿವರಗಳನ್ನು ತೋರಿಸುವ ಒಂದು ಖಾಯಂ ವಿಶೇಷ
ರಿಜಿಸ್ಟರನ್ನು, ಜಿಲ್ಲಾಧಿಕಾರಿಯ ಕಛೇರಿಯಲ್ಲಿ ಈ ನಿಯಮಗಳಿಗೆ ಲಗತ್ತಿಸಿದ ನಮೂನೆಯಲ್ಲಿ ನಿರ್ವಹಿಸತಕ್ಕದ್ದು.

**5. ಇತರ ಪ್ರಾಧಿಕಾರಗಳಿಗೆ ಕಳುಹಿಸಬೇಕಾದ ಆದೇಶದ ಪ್ರತಿಗಳು.–** ಜಿಲ್ಲಾಧಿಕಾರಿಯು ಹೊರಡಿಸಿದ ನಿಷೇಧಾಜ್ಞೆಯ ಒಂದು ಪ್ರತಿಯನ್ನು ಮಾಹಿತಿಗಾಗಿ ಇತರ ಜಿಲ್ಲಾಧಿಕಾರಿಗಳಿಗೆ ಕಳುಹಿಸತಕ್ಕದ್ದು

**6. ಯಾವುದೇ ಪ್ರದರ್ಶನಕ್ಕೆ ಹೋಗುವ ಮತ್ತು ಅದನ್ನು ಪರಿಶೀಲಿಸುವ ಅಧಿಕಾರ.–**ತಹಶೀಲ್ದಾರರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಕಂದಾಯ ಇಲಾಖೆಯ ಯಾರೇ ಅಧಿಕಾರಿಯು ಮತ್ತು ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಪೋಲೀಸ್ ಇಲಾಖೆಯ ಯಾರೇ ಅಧಿಕಾರಿಯು, ಯಾವುದೇ ರೂಪಕವನ್ನು, ಮೂಕಾಭಿನಯವನ್ನು ಅಥವಾ ಇತರ ನಾಟಕವನ್ನು ಪ್ರದರ್ಶಿಸುವಂಥ ಯಾವುದೇ ಸಾರ್ವಜನಿಕ ಸ್ಥಳಕ್ಕೆ ಪ್ರದರ್ಶನದ ಸ್ವರೂಪವನ್ನು ನಿರ್ಧರಿಸುವ ಉದ್ದೇಶಕ್ಕಾಗಿ ಅದನ್ನು ನೋಡಲು ಪ್ರವೇಶ ಮಾಡತಕ್ಕದ್ದು.

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ದಿನಾಂಕ 03.02.1966ರ ಕರ್ನಾಟಕ ರಾಜಪತ್ರದಲ್ಲಿ ಪ್ರಕಟವಾಗಿದೆ. ಅಧಿಸೂಚನೆಯ ಸಂಖ್ಯೆ. ಹೆಚ್‌ಡಿ 10 ಸಿಎನ್‌ಪಿ 64, ದಿನಾಂಕ 21.01.1966ರ ಪುಟ 610–611 ನೋಡಿ.

**ಅನುಬಂಧ**

(4ನೇ ನಿಯಮ ನೋಡಿ)

1. ಕ್ರಮಸಂಖ್ಯೆ
2. ಪೋಲೀಸರಿಂದ ಮೊದಲ ಮಾಹಿತಿ ವರದಿಯನ್ನು ಸ್ವೀಕರಿಸಿದ ದಿನಾಂಕ
3. ಪ್ರದರ್ಶನದ ಹೆಸರು
4. ಕರ್ತೃವಿನ ಹೆಸರು
5. ಈ ಅಧಿನಿಯಮದ 4ನೇ ಪ್ರಕರಣದ ಮೇರೆಗೆ ಆದೇಶಹೊರಡಿಸಲು ಕಾರಣಗಳು
6. ಆದೇಶ ಹೊರಡಿಸಿದ ದಿನಾಂಕ
7. ಆದೇಶವನ್ನು ಯಾರಿಗೆ ಜಾರಿಗೊಳಿಸಬೇಕಾಗಿದೆಯೋ ಆ ಸಂಘಟಕರು ಅಥವಾ ಪ್ರಮುಖ ವ್ಯಕ್ತಿಗಳು, ಮುಂತಾದವರ ಹೆಸರುಗಳು
8. ಆದೇಶವನ್ನು ಜಾರಿಗೊಳಿಸಿದ ವಾಸ್ತವಿಕ ದಿನಾಂಕ
9. ಜಾರಿಯ ವಿಧಾನ
10. ಪ್ರದರ್ಶನವನ್ನು ನಿಷೇಧಿಸಲಾದ ಸ್ಥಳ
11. ಪ್ರದರ್ಶನವನ್ನು ನಿಷೇಧಿಸಲಾದ ಅವಧಿ
12. ಷರಾ.

**CERTIFICATE**

The above translation of the Karnataka Dramatic Performances Act, 1964 (39 of 1964) and the Karnataka Dramatic Performances Rules 1965 shall be the authoritative text in the Kannada Language under section 5A of the karnataka official Language Act, 1963 (Karnataka Act No.26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೆಗೌಡ**

ಪಿ.ಆರ್. 320

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ವಸತಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಇ 72 ಕಗೃಮಂ 2006, ಬೆಂಗಳೂರು, ದಿನಾಂಕ: 03ನೇ ಮಾರ್ಚ್, 2006.**

**ವಿಷಯ** : ಕರ್ನಾಟಕ ಗೃಹ ಮಂಡಳಿಗೆ ಅಧ್ಯಕ್ಷರನ್ನು ನೇಮಕ ಮಾಡುವ ಬಗ್ಗೆ.

ಕರ್ನಾಟಕ ಗೃಹ ಮಂಡಳಿ ಅಧಿನಿಯಮ 1962ರ ಕಲಂ 3 (2) (ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಡಿ.ಟಿ. ಜಯಕುಮಾರ್, ಮಾನ್ಯ ವಸತಿ ಸಚಿವರು ಇವರನ್ನು ಕರ್ನಾಟಕ ಗೃಹ ಮಂಡಳಿಯ ಅಧ್ಯಕ್ಷರನ್ನಾಗಿ ಮುಂದಿನ ಆದೇಶದವರೆಗೆ ನೇಮಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 357

**ಐ. ನೀಲಕಂಠನ್,**

ಪೀಠಾಧಿಕಾರಿ–3, ವಸತಿ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 105 ಅಪ್ರಾ 2006, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ, 2006.**

ಅಧಿಸೂಚನೆ ಸಂಖ್ಯೆ. ನಅಇ 179 ಬೆಂರೂಪ್ರಾ 2005, ದಿನಾಂಕ: 30.11.2006 ರಲ್ಲಿ ಶ್ರೀ ವಿಷಕಂಠಯ್ಯ, ರವರನ್ನು ರಾಮನಗರ–ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರ ಸದಸ್ಯತ್ವವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಬೆಂಗಳೂರು ರವರನ್ನು ಅಧ್ಯಕ್ಷರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 358

**ಎನ್.ವೈ. ಸಾಗರ,**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 105 ಅಪ್ರಾ 2006, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ, 2006.**

ಅಧಿಸೂಚನೆ ಸಂಖ್ಯೆ. ನಅಇ 179 ಬೆಂರೂಪ್ರಾ 2005, ದಿನಾಂಕ: 30.11.2006 ರಲ್ಲಿ ಈ ಕೆಳಗೆ ಕಾಣಿಸಿರುವ ಮಾಗಡಿ ನಗರ ಯೋಜನಾ ಪ್ರಾಧಿಕಾರಕ್ಕೆ ಅಧ್ಯಕ್ಷರು / ಸದಸ್ಯರನ್ನು ನೇಮಕ ಮಾಡಲಾಗಿತ್ತು.

1) ಶ್ರೀ ಮಹಮ್ಮದ್ ಸಿರಾಜ್ ಬಿನ್ ಅಬ್ದುಲ್ ವಹಾಬ್ ಅಧ್ಯಕ್ಷರು
2) ಶ್ರೀ ಎಂ. ನಾಗೇಂದ್ರ ಬಿನ್ ಮಾಗಡಪ್ಪ ಸದಸ್ಯರು
3) ಶ್ರೀ ಬಿ.ಎನ್. ರಾಜು ಬಿನ್ ನಂಜುಂಡಯ್ಯ ಸದಸ್ಯರು
4) ಶ್ರೀ ರಾಮಯ್ಯ ಕೆ.ಆರ್. ಬಿನ್ ರುದ್ರಪ್ಪ ಸದಸ್ಯರು

ಮೇಲ್ಕಾಣಿಸಿದ ಅಧ್ಯಕ್ಷರು / ಸದಸ್ಯರ ಸದಸ್ಯತ್ವವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ ಹಾಗೂ ಉಪ ವಿಭಾಗಾಧಿಕಾರಿ, ರಾಮನಗರ ರವರನ್ನು ಅಧ್ಯಕ್ಷರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 359

**ಎನ್.ವೈ. ಸಾಗರ,**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ

**ಸಂಖ್ಯೆ: ನಅಇ 105 ಅಪ್ರಾ 2006, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ, 2006.**

ಅಧಿಸೂಚನೆ ಸಂಖ್ಯೆ. ನಅಇ 180 ಬೆಂರೂಪ್ರಾ 2005, ದಿನಾಂಕ: 7.10.2005 ರಲ್ಲಿ ಶ್ರೀ ಇಲಿಯಾಸ್ ಖಾದ್ರಿ, ರವರನ್ನು ಮಾನ್ವಿ ನಗರ ಯೋಜನಾ ಪ್ರಾಧಿಕಾರಕ್ಕೆ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರ ಸದಸ್ಯತ್ವವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ ಹಾಗೂ ಉಪ ವಿಭಾಗಾಧಿಕಾರಿ, ಮಾನ್ವಿ ರವರನ್ನು ಅಧ್ಯಕ್ಷರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 360

**ಎನ್.ವೈ. ಸಾಗರ,**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## PERSONNEL AND ADMINISTRATIVE REFORMS SECRETARIAT

## ADDENDUM

**No. DPAR 45 CVV 2005, Bangalore, Dated: 29th September 2005.**

In exercise of the powers conferred under Section 5(1) and 19(1) of the Right to Information Act, 2005, in the Notification of even number dated 5th September 2005 issued identifying the authorities in respect of Department of Personnel and Administration Reforms (excluding Administrative Reforms Wing) the following shall be included, viz...

| Public Authority | Section | Public Information Officer | First Appelate Authority |
|---|---|---|---|
| 1 | 2 | 3 | 4 |
| Department of Personnel & Administrative Reforms | DP & AR (Accounts - IRLA) | Under Secretary to Government, DP & AR (Accounts-IRLA) | Addl. / Joint / Deputy Secretary DP & AR (Services) |

By order and in the name of the Governor of Karnataka,

**K.H. SESHAGIRI**

P.R. 356

Under Secretary to Government,

Department of Personnel and Administrative Reforms (Personnel).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಲಾ 51 ಎಲ್ಎಡಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ, 2006.**

ದಿನಾಂಕ: 19.01.2006ರ ಅಧಿಸೂಚನೆ ಸಂಖ್ಯೆ: ಲಾ 51 ಎಲ್ಎಡಿ 2004ರಲ್ಲಿನ ಕ್ರಮ ಸಂಖ್ಯೆ: 7 ರಲ್ಲಿರುವ 'ಶ್ರೀ ಬಿ.ಜಿ. ವೆಂಕಟೇಶ್ ಕುಲಕರ್ಣಿ' ಎಂಬುದನ್ನು 'ಶ್ರೀ ವೆಂಕಟೇಶ್ ಕುಲಕರಣಿ' ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 781

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

| | | | | |
|---|---|---|---|---|
| (1) | (2) | (3) | (4) | (5) |

**HOME SECRETARIAT**

**NOTIFICATION No. HT 259 SFB 2005, Bangalore, Dated: 25th March 2006**

Whereas the draft of the Mysore Fire Force including Ministrial Service (Recruitment )Rules 1971 was published as required by sub-section(1) of section 3 read with section 8 of the Karnataka State Civil Services Act, 1978 (Karnataka Act 14 of 1990), in notification No. HD 131 SFB 2000, dated: 26th August 2005 in Karnataka Gazette (Extra-ordinary) inviting objections and suggestions from persons likely to be effected their by within 15 days from the date of fifteen days from the date of publications in the official Gazette.

And whereas , the said Gazette was made available to public on 26-8-2005

And whereas, the objections and suggestions received in this behalf have been considered by the State Government.

Now, therefore in exercise of the power conferred by sub-section (1) of Section 3 read with section 8 of the Karnataka Civil Service Act, 1978 (Karnataka Act 14 of 1990) The Government of Karnataka here makes the following rules namely;

**RULES**

**1. Title and commencement:** (1) These rules may be called the Karnataka State Fire and Emergency Services (Cadre and Recruitment) Rules, 2005.

(2) They shall come into force on the date of their publication in the official Gazette.

**2. Method of recruitment and minimum qualification :-** The Karnataka Fire and Emergency Services consists of the categories of posts and scale of pay as specified in column (2) of the Schedule below. Their number, the method of recruitment and minimum qualification shall be as specified in the corresponding entries in column (3), (4) and (5) thereof.

**3. Repeal and savings :-** The Mysore Fire Force (Cadre and Recruitment) Rules, 1971, are hereby repealed.

Provided that such repeal shall not affect:-

(a) the previous operation of the said rules or anything duly done or any action taken under; or

(b) any right, privilege, obligation or liability, acquired, accrued or incurred under the said rules.

(2) Notwithstanding anything contained in these rules, action already initiated if any for disciplinary proceedings or recruitment under the repealed rules before the commencement of these rules shall be continued and completed under the repealed rules, as if, they are not repealed.

By order and in the Name of the Governor of Karnataka,

**S. RAJU**

Under Secretary to Government,

Home Department, (Police Auxillary Services)

**SCHEDULE**

**(see rule 2)**

**KARNATAKA STATE FIRE AND EMERGENCY SERVICES**

| Sl. No | Category of post and pay scale | No. of posts Per. | Temp | Method of Recruitment | Minimum Qualification and period of probation |
|---|---|---|---|---|---|
| (1) | (2) | (3) | | (4) | (5) |
| 1. | Director General of Police and Director, Fire & Emergency Services IPS Above Super time Scale | 1 | - | By posting of an officer from IPS in the cadre of Director General of Police. | - |

| (1) | (2) | (3) | (4) | (5) |
|---|---|---|---|---|
| 2. | Inspector General of Police and Additional Director, Fire and Emergency Services<br>IPS Super time Scale | 1 - | By posting of an officer from IPS in the cadre of Inspector General of Police. | |
| 3. | Deputy Inspector General of Police, Fire and Emergency Services<br>IPS Super time Scale | 1 - | By posting of an officer from IPS in the cadre of Deputy Inspector General of Police. | - |
| 4 | Joint Director,<br>(Rs. 10620 – 14960) | 1 - | By Promotion from the cadre of Deputy Director. | **For promotion.-** Must have put in a service of not less than five years in the cadre of Deputy Director, provided that if no suitable candidate is available with five years of service, candidate with two years of service may be considered. |
| 5 | Deputy Director<br>( Rs. 9580 - 14200) | 1 - | By Promotion from the cadre of Chief Fire Officer or Commandant, R.A. Mundkur Fire & Emergency Services Academy, on the basis of combined seniority. | **For promotion.-** Must have put in a service of not less than seven years in the cadre of Chief Fire Officer/ Commandant, Fire & Emergency Services Academy, provided that if no suitable candidate is available with seven years of service, candidate with two years of service may be considered. |
| 6 | Chief Fire Officer<br>( Rs. 8000 - 13440) | 3 - | By Promotion from the cadre of Regional Fire Officer. | **For promotion.-** Must have put in a service of not less than seven years in the cadre of Regional Fire Officer. |
| 7 | Regional Fire Officer<br>(Rs. 5575 - 10620) | 11 - | By Promotion from the cadre of District Fire Officer (or) District Fire Officer (Training) (or) District Fire Officer, Workshop (or) District Fire Officer, Stores on the basis of combined seniority. | **For promotion.-** (1) Must have put in a service of not less than seven years in the cadre of District Fire Officer / District Fire Officer (Training) / District Fire Officer, Workshop / District Fire Officer, Stores.<br>(2) Must have passed the Divisional Fire Officers Course at the National Fire Service College Nagpur or any equivalent course recognised by Government of India. |
| 8 | District Fire Officer<br>(Rs. 5200 - 9580) | 31 - | By promotion from the cadre of Fire Station Officer/ Fire Station Officer (Training) / Fitter Class-I on the basis of combined seniority. | **For promotion.-** (1) Must have put in a service of not less than five years in the cadre of Fire Station Officer or Fire Station Officer (Training) or Fitter Class – I.<br>(2) Must have passed the Station Officer's Course at the National Fire Service College, Nagpur or an equivalent course recognised by the Government. |

| (1) | (2) | (3) | (4) | (5) |
| --- | --- | --- | --- | --- |
| 9 | Fire Station Officer<br>(Rs. 4150 - 7800) | 155 - | Fifty percent by Promotion from the cadre of Assistant Fire Station Officer.<br><br>Fifty percent by Direct Recruitment | **For Promotion.-** (1) Must have put in not less than three years of service in the cadre of Assistant Fire Station Officer.<br>(2) Must have passed S.S.L.C. or equivalent examination.<br>**For Direct Recruitment.-** (i) Age Limit:- Notwithstanding anything contained in rule 6 (2A) of the Karnataka Civil Service (General Recruitment) Rules, 1977, must have attained the age of 21 years and not attained the age of (i) 26 years in case of Scheduled Castes, Scheduled Tribes and Other Backward Classes;<br>(ii) 24 years in case of others i.e general merit category, on the last date fixed for receipt of application:<br>Provided that age limit in case of candidate who is an ex-serviceman discharged from service by reason of demobilisation, retrenchment or retirement shall be relaxed by the number of years of service in the military subject to a maximum of 42 years of age.<br>(iii) Qualification.- (a) Must be holder of a degree in Science with chemistry as one of the subjects from any recognized university established by law in India.<br>(b) Must have Physical Standards specified in the Appendix - 'A' and 'B'<br>(iv) **Recruitment Committee**.- Selection shall be made by a Recruitment Committee consisting of the following official members:-<br>(a) Director, Fire and Emergency Services - Chairman |

| (1) | (2) | (3) | (4) | (5) |
|---|---|---|---|---|
| | | | | (b) IGP and Additional Director Fire and Emergency Services - Member Secretary<br>(c) One senior officer of the Department nominated by Director General Fire and Emergency Services, not below the rank of Deputy Director - Member<br>(d) Director of Social Welfare - or his nominee not below the rank of Deputy Director. - Member<br>(e) The Chairman may co-opt an expert in the field of medicine (or) physical education to assess the physical standards during recruitment.<br>(v) **Procedure for Selection.-**<br>Selection of candidate shall be made by the Recruitment Committee. The Recruitment Committee shall call for applications from all eligible candidates through media publicity in not less than two leading news papers having wide circulation (of which at least one shall be in Kannada) and in Karnataka Gazette. Selection shall be made on the basis of marks obtained in written test and viva voce. Only those candidates who possess the physical standards specified in Appendix 'A' and who qualify in the physical fitness test specified below shall be eligible to appear for written examination.<br>(vi) **Physical Fitness Tests.-**<br>The tests as indicated below shall be conducted to assess the physical fitness, stamina and courage of the candidates.<br>(1) 100 metres running - Maximum time to qualify 15 seconds. The candidates who run the |

| (1) | (2) | (3) | (4) | (5) |
|---|---|---|---|---|
| | | | | distance within 15 seconds shall be considered to have qualified in this event.<br>(2)100 metres' running - Maximum time to qualify: 25 seconds with weight of 22 kgs. on the back. The candidates who run the distance within 25 seconds shall be considered to have qualified in the event.<br>(3) Climbing ladder with - Maximum time to qualify: 20 seconds with 22 kgs. Weight on the back upto 20 feet height. The candidates who climb the ladder upto 20 feet height with 22 kgs. weight within 20seconds shall be considered to have qualified in the event.<br>(4)Shot put 7.25% kgs.-Minimum distance to qualify: 5.60 metres within three attempts.The candidates who throw the shot to a distance of 5.60 metres (18 feet) feet or more shall be considered to have qualified in the event.<br>(5)800 metres' running - Maximum time to qualify:- 2 minutes and 50 seconds. The candidates who run the distance within 2 minutes and 50 seconds shall be considered to have qualified in this event.<br>**NOTE:** A candidate shall have to qualify in atleast 3 out of the 5 events in the physical fitness test in order to qualify himself for the written test. The candidates who remain absent for the physical test shall be deemed to have been disqualified.<br>(vii) Written Test.- There shall be two objective type of question papers in the written test of the duration of one & half hour each. |

| (1) | (2) | (3) | (4) | (5) |
|---|---|---|---|---|
| | | | | (1) Paper - (i) General Knowledge (Kannada or English) Maximum marks - 100<br>(2) Paper - (ii) Science and aptitude test (Kannada or English) Maximum marks. - 100<br>(viii) **Viva Voce.-** Recruitment Committee, shall prepare a merit list of candidates based on the marks obtained in the written test and they shall be called for Viva voce in ratio of 1:3 in each category. The candidates who are called for viva voce have to appear before recruitment committee for an interview carrying 10 marks.<br>**NOTE**: The candidates who remain absent for written test, Viva voce shall be deemed to have been disqualified.<br>(ix) The recruitment committee shall prepare a final select list of candidates, category wise, equivalent to the number of vacancies notified, based on the marks obtained in the written and viva voce test, taking into consideration the reservation prescribed in General Recruitment rules and in any other relevant law.<br>The Recruitment Committee shall also prepare an additional list of qualified candidates not exceeding 10% of the vacancies notified in similar manner as mentioned above. The Recruitment Committee shall submit both main and additional lists of candidates to the appointing authority. The appointing authority shall refer the selected candidates of the main list to the Medical Board constituted by the Director, Health and Family Welfare Dept., for medical exam- ination as specified in the Appendix 'B'. |

| (1) | (2) | (3) | (4) | (5) |
|---|---|---|---|---|
| | | | | The Appointing Authority shall then appoint the candidates who pass in medical examination after satisfying itself after such enquiry as it may consider necessary that the candidate is suitable in all respect for appointment and after other prescribed verification. The select list shall be valid for one year or until all the vacancies notified are filled, which ever is earlier.<br>The candidates included in the additional list shall be referred to the Medical Board and appointed, after all the candidates included in the main list are appointed or any candidate is found not suitable in any respect for appointment:<br>Provided that, the appointment of candidates included in the additional list shall be limited to the notified vacancies only.<br>(x) Probation.- The period of probation shall be two years. During the period of probation, the newly recruited Fire Station Officers shall have to,-<br>(i) undergo Sub officers course of six month duration in the R.A.Mundkur Fire and Emergency Services Academy, Bangalore or in any other Fire Service training college/ Institute of any other state or Government of India; and<br>(ii) undergo a course of practical training for a period of six months in a fire station as directed by the Director, Fire and Emergency Services and at end shall pass an examination in the following subjects:- |

| (1) | (2) | (3) | (4) | (5) |
|---|---|---|---|---|
| | | | | Maximum Marks / Minimum Marks for pass<br>(a) Physical Training and Squad Drill - 100 50<br>(b) Administration and Accounts - 100 50<br>He shall be given a total of three chances to pass the examination<br>(xi) Every candidate selected for appointment shall, immediately after the appointment, execute a bond in the proforma prescribed by the Government that after he successfully completes the training courses specified above, he would serve the Government of Karnataka for a period of at least 3 years from the date of completion of training , failing which he shall be liable to refund to the Government the full amount spent for his training as also the pay and allowance drawn by him during the period of such training or Rs.50,000 whichever is less |
| 10 | Assistant Fire Station Officer (Rs. 3850 - 7050) | 151 - | Seventy five percent by promotion from the cadre of Leading Fireman and twenty five percent by promotion from the cadre of Fireman Driver, Driver Mechanic, Fitter Class - II, Electrician Class – II, Welder cum Tinsmith Class - II, Painter Class - II, on the basis of combined seniority, seniority being determined on the basis of length of service in the equivalent cadre. | **For promotion.-** (1) Must have put in a service of not less than five years in the respective cadres.<br>(2) Must have passed the orientation course conducted by the Fire and Emergency Services Academy as specified by the Director General of Police & Director, Fire & Emergency Services. |

| (1) | (2) | (3) | (4) | (5) |
|---|---|---|---|---|
| 11 | Leading Fireman (Rs. 3300 - 6300) | 655 - | By promotion from the cadre of Fireman. | **For promotion -** Must have put in a service of not less than five years either in the cadre of Fireman or Fitter Class III or Carpenter Class III or Cleaner. |
| 12 | Fireman Driver (Rs. 3300 - 6300) | 722 - | Eighty percent by direct recruitment and twenty percent by promotion from the cadre of Fireman. | **For Direct Recruitment.-**<br>(1) Age.- Notwithstanding anything contained in rule 6(2-A) of the Karnataka Civil Services (General Recruitment) Rules, 1977, must have attained the age of 18 years and not attained the age of (i) 26 years in case of Scheduled Castes, Scheduled Tribes and Other Backward Classes. (ii) 24 years in case of General Merit category on the last date fixed for receipt of application:<br>Provided that age in case of a candidate who is an ex-serviceman discharged from service by reason of demobilisation, retrenchment or retirement, shall not exceed 42 years, on the last date of receipt of application.<br>(2) Must have passed S.S.L.C examination or equivalent examination with Kannada as one of the subjects.<br>(3) Must be holder of a valid Heavy Transport Vehicles' Driving Licence.<br>(4) Must have physical standard specified in the Appendix 'A' and 'B'.<br>(5) Selection shall be made by a Recruitment Committee consisting of,-<br>(a) Deputy Inspector General Fire and Emergency Services - Chairman<br>(b) An officer not below the rank of Deputy Director of the Fire & Emergency Services department, nominated by the Director General of Police and Director Fire & Emergency Services - Member Secretary |

